


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1725 (2033)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಸಮಾಜ ಕಲ್ಯಾಣ ಸಚಿವರು

ವಿಷಯ : ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳ ಸಹ ಶಿಕ್ಷಕರುಗಳ ಸಮಸ್ಯೆಗಳನ್ನು ನಿವಾರಿಸುವ ಕುರಿತು

(ಅ) ಸಮಾಜ ಕಲ್ಯಾಣ ಇಲಾಖೆಯ ಕ್ರೈಸ್ ಸಂಘದ ಖಾಯಂ ಸಿಬ್ಬಂದಿಗಳಿಗೆ ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಮತ್ತು ಸರ್ಕಾರವು ಜಾರಿ ಮಾಡಿದ ಅದೇಶದಂತೆ ವಸತಿ ಶಾಲಾ ನೌಕರರಿಗೆ ಮುಂಬಡ್ತಿ ನೀಡಲು ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು ;

(ಆ) ಕರ್ನಾಟಕ ನಾಗರಿಕ ಸೇವಾ ನಿಯಮ-1957ರ ಸೇವಾ ಜೇಷ್ಠತಾ ನಿಯಮಗಳು ಕ್ರೈಸ್ ನೌಕರರಿಗೆ ಅನ್ವಯಿಸುತ್ತವೆಯೇ ; (ವಿವರ ನೀಡುವುದು)

(ಇ) ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳ ಸಹ ಶಿಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿದೆಯೇ ; ಇಲ್ಲವಾದಲ್ಲಿ, ಜೇಷ್ಠತಾ ಪಟ್ಟಿ ತಯಾರಿಸುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು ;

(ಈ) ಶಿಕ್ಷಣ ಇಲಾಖೆಯ ಸಹ ಶಿಕ್ಷಕರುಗಳಿಗೆ ಬಡ್ತಿ ನೀಡುವಂತೆ ಜೇಷ್ಠತಾ ಪಟ್ಟಿಯ ಅನುಸಾರ ಸದರಿ ಸಹ ಶಿಕ್ಷಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡುವುದಕ್ಕೆ ಸರ್ಕಾರ ಏನಾದರೂ ಕ್ರಮಕೈಗೊಂಡಿದೆಯೇ ; ಇಲ್ಲವಾದಲ್ಲಿ ಕಾರಣವೇನು ;

ಉ) ಖಾಲಿಯಿರುವ ಪ್ರಾಂಶುಪಾಲರ ಹುದ್ದೆಗಳಿಗೆ ಪ್ರತಿಶತ ಹುದ್ದೆಗಳನ್ನು ಮೀಸಲಿರಿಸಿ, ಸಹ ಶಿಕ್ಷಕರುಗಳನ್ನು ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲಾಗುವುದೇ?